ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 12 ನೇ ಮಾರ್ಚ್, 2020

ಕೆ.ಎಸ್.ಎಫ್.ಸಿ ಸಂಸ್ಥೆಯ ಯೋಜನೆಗಳ ಕುರಿತು

ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

686 (949) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯದಲ್ಲಿರುವ ಸಣ್ಣ ಪ್ರಮಾಣದ ಉದ್ದಿಮೆಗಳು ಹಾಗೂ ಹಿಂದುಳಿದ ಪ್ರದೇಶಗಳ ಕೈಗಾರಿಕಾ ಅಭಿವೃದ್ದಿಗಾಗಿ ಮತ್ತು ನೂತನ ಉದ್ದಿಮೆಗಳನ್ನು ಸ್ಥಾಪಿಸುವವರಿಗೆ ಕೆ.ಎಸ್.ಎಫ್.ಸಿ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳು ಯಾವುವು;

(ಆ) ಈ ಹಣಕಾಸು ಸಂಸ್ಥೆಯು ಕಳೆದ ಮೂರು ವರ್ಷಗಳಲ್ಲಿ ಎಷ್ಟು ವಿಧದ ಉದ್ದಿಮೆಗಳಿಗೆ ಆರ್ಥಿಕ ನೆರವು ನೀಡಿದೆ; (ಜಿಲ್ಲಾವಾರು ಮತ್ತು ಮಂಡ್ಯ ಜಿಲ್ಲೆಯ ತಾಲ್ಲೂಕುವಾರು ಸಂಖ್ಯಾ ವಿವರ ನೀಡುವುದು)

(ಇ) ಕಳೆದ ಮೂರು ವರ್ಷಗಳಲ್ಲಿ ಮಹಿಳಾ ಉದ್ದಿಮೆದಾರರಿಗೆ ಯಾವ ಯಾವ ಯೋಜನಾ ಸೌಲಭ್ಯಗಳನ್ನು ಒದಗಿಸಿಕೊಡಲಾಗಿದೆ; (ವಿವರ ನೀಡುವುದು)

(ಈ) ಕೆ.ಎಸ್.ಎಫ್.ಸಿ ಸಂಸ್ಥೆಯ 2019-20ರ ಆರ್ಥಿಕ ವರ್ಷದಲ್ಲಿ ಹೊಸ ಯೋಜನೆಗಳು ಯಾವುವು;

(ಉ) ಹಿಂದುಳಿದ ವರ್ಗಗಳ ಉದ್ದಿಮೆದಾರರಿಗೆ ಆರ್ಥಿಕ ನೆರವಿನ ವಿಶೇಷ ಪ್ರೋತ್ಸಾಹ ಯೋಜನೆಗಳನ್ನು ರೂಪಿಸಲಾಗಿದೆಯೇ? (ವಿವರಗಳನ್ನು ನೀಡುವುದು)